KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮಾರ್ಚ್ ೩೦, ೨೦೦೬ (ಚೈತ್ರ ೯, ಶಕ ವರ್ಷ ೧೯೨೮) | ಸಂಚಿಕೆ ೧೩ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 408/ ಸಅಸೇ 2005, ಬೆಂಗಳೂರು, ದಿನಾಂಕ:24ನೇ ಜನವರಿ, 2006**

ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗೆ ಸೇರಿರುವ ಕೆಳಕಂಡ ಸರ್ಕಾರದ ಅಧೀನ ಕಾರ್ಯದರ್ಶಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೂ.10620-14960ರ ವೇತನ ಶ್ರೇಣಿಯ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯಲ್ಲಿ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಲ್ಲಿ ನೇಮಿಸಲಾಗಿದೆ. ಈ ಅಧಿಕಾರಿಗಳು ಬಡ್ತಿ ಹೊಂದಿದ ಹುದ್ದೆಗಳಲ್ಲಿ 15 ದಿನಗಳೊಳಗೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ | ಬಡ್ತಿ ಮೇಲೆ ನೇಮಿಸಲಾದ ಹುದ್ದೆ |
|---|---|---|
| 1. | ಎಂ.ಎಸ್. ಮರುಳಸಿದ್ದಯ್ಯ, ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ. | ಆಂತರಿಕ ಆರ್ಥಿಕ ಸಲಹೆಗಾರರು, ನಗರಾಭಿವೃದ್ಧಿ ಇಲಾಖೆ- ಖಾಲಿ ಹುದ್ದೆ. |
| 2. | ಜೆ. ರಾಘವೇಂದ್ರಾಚಾರ್, ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ. | ಉಪಕಾರ್ಯದರ್ಶಿ, ಕಂದಾಯ ಇಲಾಖೆ- ಶ್ರೀ ಎಂ.ಜೆ. ಕೌಜಲಗಿ, ಇವರ ವರ್ಗಾವಣೆಯಿಂದ ತೆರವಾದ ಹುದ್ದೆ. |
| 3. | ಎಂ. ಪ್ರಾಣದೇವ, ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ. | ಉಪಕಾರ್ಯದರ್ಶಿ, ಸಿ.ಆ.ಸು.ಇ. (ಕಾರ್ಯಕಾರಿ) - ಖಾಲಿ ಹುದ್ದೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿಆರ್. 232

### ಕಂದಾಯ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಕಂಇ 68 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ:25ನೇ ಜನವರಿ, 2006**

ಶ್ರೀ ಯಾದವಾನಂದ ಮಹಾ ಸಂಸ್ಥಾನ, ಶ್ರೀ ಬಸವ ಯಾದವಾನಂದ ಸ್ವಾಮೀಜಿ, ಚಿತ್ರದುರ್ಗ: ಇವರು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕಿನ ಕೆಂಚನಕಟ್ಟೆ ಗ್ರಾಮದ ಸರ್ವೆ ನಂ.4ರಲ್ಲಿ 44 ಎಕರೆ 24 ಗುಂಟೆ ಜಮೀನಿನ ಪೈಕಿ 05-00 ಎಕರೆ ಜಮೀನನ್ನು ಮಠ, ಸಮುದಾಯ ಭವನ ಕಟ್ಟಡ, ವಸತಿಗೃಹ, ಪೂಜಾಮಂದಿರ, ಕಲ್ಯಾಣ ಮಂಟಪ, ದೇವಸ್ಥಾನ, ಇತ್ಯಾದಿ ಸ್ಥಾಪಿಸುವ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ರವರು ತಮ್ಮ ಪತ್ರ ಸಂಖ್ಯೆ:

ಎಲ್‌ಎನ್‌ಡಿ/ ಸಿಆರ್-280/ 2003-04 ದಿನಾಂಕ: 21.05.2004 ಮತ್ತು 27.07.2005ರ ಪ್ರಸ್ತಾಪಿತ ಮೇಲ್ಕಂಡ ಗ್ರಾಮದ ಸರ್ವೆ ನಂಬರ್ 4ರಲ್ಲಿ ಒಟ್ಟು 44 ಎಕರೆ 24 ಗುಂಟೆ ಜಮೀನಿನ ಪೈಕಿ 05-00 ಎಕರೆ ಜಮೀನನ್ನು ದಾನ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109(1-ಎ) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ. ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯ್ತಿ ನೀಡಲು ಸದರಿ ಅಧಿನಿಯಮದ ಕಲಂ 109(1-ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1-ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು 1996ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79-ಎ, 79ಬಿ, ಅಥವಾ 80ಕ್ಕೆ ವಿನಾಯ್ತಿ ನೀಡಿ ಶ್ರೀ ಯಾದವಾನಂದ ಮಹಾ ಸಂಸ್ಥಾನ, ಶ್ರೀ ಬಸವ ಯಾದವಾನಂದ ಸ್ವಾಮೀಜಿ, ಚಿತ್ರದುರ್ಗ: ಇವರು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕಿನ ಕೆಂಚನಕಟ್ಟೆ ಗ್ರಾಮದ ಸರ್ವೆ ನಂ.4ರಲ್ಲಿ 44 ಎಕರೆ 24 ಗುಂಟೆ ಜಮೀನಿನ ಪೈಕಿ 05-00 ಎಕರೆ ಜಮೀನನ್ನು ಮಠ, ಸಮುದಾಯ ಭವನ ಕಟ್ಟಡ, ವಸತಿಗೃಹ, ಪೂಜಾ ಮಂದಿರ, ಕಲ್ಯಾಣ ಮಂಟಪ, ದೇವಸ್ಥಾನ ಇತ್ಯಾದಿ ಸ್ಥಾಪಿಸುವ ಉದ್ದೇಶಕ್ಕಾಗಿ ಭೂ ಮಾಲೀಕರಿಂದ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1-ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸತಕ್ಕದ್ದು. ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪೆನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ ಓ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ ಆದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರಕ್ಕೆ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109 ರನ್ವಯ ವಿನಾಯ್ತಿ ನೀಡಲು ಶಿಫಾರಸ್ಸು ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆ ಅಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಪಿಆರ್. 233

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸುಧಾರಣೆ).

## KARNATAKA POWER TRANSMISSION CORPORATION LIMITED

## OFFICE OF THE EXECUTIVE ENGINEER (ELEC.) M.W. DIVISION, KPTCL, VIDYUTNAGAR, KARWAR ROAD, HUBLI-580024

## NOTIFICATION

**Ref.No.605/ EEE/ AEE(O)/MWD/ HBL/ 8093-95, Dated: 20th January, 2006**

Karnataka Power Transmission Corporation Limited has formulated scheme under section 28 & clause (e) of the act 18 of the Electricity supply act 1948 and the scheme is hereby published in pursuance of section 29(2) of the said Act. This notification is issued for the information of the concerned person. Particulars of the scheme are as here under, Name of the Work; Proposed 110KV DC line from 220KV Narendra Sub-station to proposed 110KV S/S at Mruthyunjayanagar for a distance of 9.624 Kms in Dharwad District.

This proposed lien passes through the following village limits.

(1) Mummigatti, (2) Narendra, (3) Lakmapur, (4) Yatinagudda Dharwad, (5) Malapur Dharwad, (6) Gulaganjikoppa, (7) Dharwad City Limits.

KPTCL shall have and exercise all power, which the telegraphic authorities possess under part III of the telegraphic act 1985 (18 of 1985) for implementation of the above said scheme. Any objections regarding the above scheme shall be sent to the undersigned within one month from the date of Publication of this Notification for KPTCL pursuance.

Executive Engineer (Elec.),
M.W. Division, KPTCL, Hubli.

PD-34

**ಕಂದಾಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಂಇ 75 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ:21ನೇ ಜನವರಿ, 2006**

ಶುಶ್ರೂತ ವಿಶ್ರಾಂತಿಧಾಮ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರು ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ದಕ್ಷಿಣ ತಾಲ್ಲೂಕಿನ ಉತ್ತರಹಳ್ಳಿ ಹೋಬಳಿ, ಉತ್ತರಹಳ್ಳಿ ಮನವರ್ತೆ ಕಾವಲು ಗ್ರಾಮದ ಸರ್ವೆ ನಂ.18/ 4ರಲ್ಲಿ 27.00 ಎಕರೆ ಜಮೀನನ್ನು ನಿವೃತ್ತ ಗ್ರಾಮಗಳು, ವೃದ್ಧಾಶ್ರಮಗಳು ಪುನರ್ವಸತಿ ಕೇಂದ್ರಗಳು, ಹೆಲ್ತ್ ಕ್ಲಬ್‌ಗಳು ಮತ್ತು ಹೆಲ್ತ್ ರೆಸಾರ್ಟ್ಸ್‌ಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ ಭೂ ಮಾಲೀಕರಿಂದ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್/ ಸಿಆರ್-129/ 1204-05, ದಿನಾಂಕ: 11.07.2005 ಮತ್ತು 17.08.2005ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಗ್ರಾಮದ ಸರ್ವೆ ನಂ. 18/4ರಲ್ಲಿ 27.00 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109(1-ಎ) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ. ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯ್ತಿ ನೀಡಲು ಸದರಿ ಅಧಿನಿಯಮದ ಕಲಂ 109(1-ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1-ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು 1996ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಶುಶ್ರೂತ ವಿಶ್ರಾಂತಿಧಾಮ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರು ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ದಕ್ಷಿಣ ತಾಲ್ಲೂಕಿನ ಉತ್ತರಹಳ್ಳಿ ಹೋಬಳಿ, ಉತ್ತರಹಳ್ಳಿ ಮನವರ್ತೆ ಕಾವಲು ಗ್ರಾಮದ ಸರ್ವೆ ನಂ.18/4 ರಲ್ಲಿ 27.00 ಎಕರೆ ಜಮೀನನ್ನು ನಿವೃತ್ತ ಗ್ರಾಮಗಳು, ವೃದ್ಧಾಶ್ರಮಗಳು, ಪುನರ್ವಸತಿ ಕೇಂದ್ರಗಳು, ಹೆಲ್ತ್ ಕ್ಲಬ್‌ಗಳು ಮತ್ತು ಹೆಲ್ತ್ ರೆಸಾರ್ಟ್ಸ್‌ಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ ಭೂ ಮಾಲೀಕರಿಂದ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1-ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸತಕ್ಕದ್ದು. ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪೆನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರಕ್ಕೆ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ ಓ.ಡಿ.ಪಿ./ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರಕ್ಕೆ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109ರನ್ವಯ ವಿನಾಯ್ತಿ ನೀಡಲು ಶಿಫಾರಸ್ಸು ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆ ಅಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸುಧಾರಣೆ).

ಪಿಆರ್. 234

## ಕಂದಾಯ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಕಂಇ 63 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ:25ನೇ ಜನವರಿ, 2006

ಶ್ರೀ ಶನಿಮಹಾತ್ಮ ಎಜುಕೇಶನ್ ಅಂಡ್ ಚಾರಿಟಬಲ್ ಟ್ರಸ್ಟ್ (ರಿ) ಪಾವಗಡ, ತುಮಕೂರು ಜಿಲ್ಲೆ: ಇವರು ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕು, ನಾಗಲಮಡಿಕೆ ಹೋಬಳಿ, ಪಲವಳ್ಳಿ ಗ್ರಾಮದ ಸರ್ವೆ ನಂ. 64/1ರಲ್ಲಿ 6 ಎಕರೆ 18 ಗುಂಟೆ, 64/2, ರಲ್ಲಿ 7 ಎಕರೆ 03 ಗುಂಟೆ, 64/3 ರಲ್ಲಿ 5 ಎಕರೆ 08 ಗುಂಟೆ, 64/4ಎರಲ್ಲಿ 2 ಎಕರೆ 26 ಗುಂಟೆ, 64/4ಬಿ ರಲ್ಲಿ 2 ಎಕರೆ 27 ಗುಂಟೆ 65/1 ರಲ್ಲಿ 8 ಎಕರೆ 27 ಗುಂಟೆ ಮತ್ತು 65/1ರಲ್ಲಿ 9 ಎಕರೆ 00 ಗುಂಟೆ ಹೀಗೆ ಒಟ್ಟು 41 ಎಕರೆ 29 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ರವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್/ ಸಿಆರ್-06/ 2005-06 ದಿನಾಂಕ: 21.05.2005 ಮತ್ತು 07.10.2005ರ ಪ್ರಸ್ತಾಪಿತ ಮೇಲ್ಕಂಡ ಗ್ರಾಮದ ಸರ್ವೆ ನಂಬರ್‌ಗಳಲ್ಲಿ ಒಟ್ಟು 41 ಎಕರೆ 29 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109(1-ಎ) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ. ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯ್ತಿ ನೀಡಲು ಸದರಿ ಅಧಿನಿಯಮದ ಕಲಂ 109(1-ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1-ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು 1996ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಶ್ರೀ ಶನಿಮಹಾತ್ಮ ಎಜುಕೇಶನ್ ಅಂಡ್ ಚಾರಿಟಬಲ್ ಟ್ರಸ್ಟ್ (ರಿ) ಪಾವಗಡ, ತುಮಕೂರು ಜಿಲ್ಲೆ, ಇವರು ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕು, ನಾಗಲಮಡಿಕೆ ಹೋಬಳಿ, ಪಲವಳ್ಳಿ ಗ್ರಾಮದ ಸರ್ವೆ ನಂ.64/1ರಲ್ಲಿ 6 ಎಕರೆ 18 ಗುಂಟೆ, 64/2, ರಲ್ಲಿ 7 ಎಕರೆ 03 ಗುಂಟೆ, 64/3 ರಲ್ಲಿ 5 ಎಕರೆ 08 ಗುಂಟೆ, 64/4ಎರಲ್ಲಿ 2 ಎಕರೆ 26 ಗುಂಟೆ, 64/4ಬಿ ರಲ್ಲಿ 2 ಎಕರೆ 27 ಗುಂಟೆ 65/1 ರಲ್ಲಿ 8 ಎಕರೆ 27 ಗುಂಟೆ ಮತ್ತು 65/1ರಲ್ಲಿ 9 ಎಕರೆ 00 ಗುಂಟೆ ಹೀಗೆ ಒಟ್ಟು 41 ಎಕರೆ 29 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಭೂ ಮಾಲೀಕರಿಂದ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1-ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸತಕ್ಕದ್ದು. ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪೆನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರಕ್ಕೆ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ ಓ.ಡಿ.ಪಿ./ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರಕ್ಕೆ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109ರನ್ವಯ ವಿನಾಯ್ತಿ ನೀಡಲು ಶಿಫಾರಸ್ಸು ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆ ಅಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಪಿಆರ್. 235

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸುಧಾರಣೆ).

## ಪ್ರಾಧಿಕೃತ ಅಧಿಕಾರಿ ಹಾಗೂ ಉಪಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ

### ಸಂಖ್ಯೆ: ಎ3(ಬಿ1) ಅಮೊ:ಬಜಾಜ್ ಎಮ್-80-5111/ 2001-02, ದಿನಾಂಕ:20ನೇ ಜನವರಿ, 2006

**ಉಪಸ್ಥಿತರು:** ಶ್ರೀ ಜಿ.ಎ.ಎನ್. ಕರ್ಕಿಕರ್, ಪ್ರಾಧಿಕೃತ ಅಧಿಕಾರಿಗಳು,
ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಪಿರ್ಯಾದಿ:** ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, **ಸಿರಿಗೆರೆ,** (ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ)

**ಅರ್ಜಿದಾರರು:** ಶ್ರೀ ಬಿ.ಆರ್. ಚಂದ್ರಶೇಖರ್,

ಬಿನ್ ರುದ್ರನಾಯ್ಕ, ಹಾರೋಹಿತ್ಲು ಗ್ರಾಮ, ಹೊಸನಗರ ತಾಲ್ಲೂಕು, (ಪರವಾಗಿ ಶ್ರೀ ಟಿ.ಇ. ಶಂಕರಪ್ಪ, ವಕೀಲರು, ಶಿವಮೊಗ್ಗ)

**ಪ್ರಕರಣದ ಹಿನ್ನೆಲೆ:**

ದಿನಾಂಕ: 03.11.2001ರಂದು ಹಣಗೆರೆ ವನ್ಯಜೀವಿ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಗಳು ಇಲಾಖಾ ಜೀಪು ನೊಂದಣಿ ಸಂಖ್ಯೆ: ಕೆಎ-20-ಎಂ-1735ರಲ್ಲಿ ಮೂಗುಡ್ತಿ ಅರಣ್ಯ ಪ್ರದೇಶವನ್ನು ಗಸ್ತುಮಾಡಿ, ಮೂಗುಡ್ತಿ ಕ್ರಾಸಿನಲ್ಲಿ ಹಾದುಹೋಗುವ ಆಯನೂರು-ರಿಪ್ಪನ್‌ಪೇಟೆ ಮಾರ್ಗದಲ್ಲಿ ಬರುವಂತಹ ಅನುಮಾನ ಬಂದ ವಾಹನಗಳನ್ನು ನಿಲ್ಲಿಸಿ ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆ ಕುರಿತಂತೆ ತಪಾಸಣೆ ನಡೆಸಿ ನಂತರ ಕೋಣಂದೂರು-ಬುಕ್ಕಿವಾರೆ ಮಾರ್ಗವಾಗಿ ಸಿರಿಗೆರೆಗೆ ವಾಪಾಸ್ಸು ಬರುತ್ತಿರುವಾಗ ರಾತ್ರಿ 2.00 ಗಂಟೆಯ ಸಮಯದಲ್ಲಿ ಹಾರೋಹಿತ್ಲು ಸಮೀಪ ಹಾರೋಹಿತ್ಲು- ಬೆಳ್ಳೂರು ರಸ್ತೆಯಲ್ಲಿ ಇಲಾಖಾ ಜೀಪಿಗೆ ಎದುರಾದ ದ್ವಿಚಕ್ರ ವಾಹನದಲ್ಲಿ ಇಬ್ಬರು ವ್ಯಕ್ತಿಗಳು ಪ್ಲಾಸ್ಟಿಕ್ ಚೀಲದ ಮೂಟೆಯನ್ನು ಇಟ್ಟುಕೊಂಡು ಅಡ್ಡೇರಿ ಕ್ರಾಸ್ ರಸ್ತೆಯಿಂದ ಹಾರೋಹಿತ್ಲು ಕಡೆ ಹೋಗುತ್ತಿರುವುದನ್ನು ಕಂಡು ಅನುಮಾನಬಂದ ಮೇರೆಗೆ, ಸದರಿ ವಾಹನವನ್ನು ಬೆನ್ನಟ್ಟಿ ಅಸಾಮಿಗಳೊಂದಿಗೆ ವಾಹನವನ್ನು ತಡೆದು ನಿಲ್ಲಿಸಿ, ಮೂಟೆಗಳನ್ನು ಬಿಚ್ಚಿ ನೋಡಿದಾಗ, ಸದರಿ ಚೀಲಗಳಲ್ಲಿ ಒರಟು ಕೆತ್ತನೆ ಮಾಡಿದ ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳಿರುವುದನ್ನು ಕಂಡು, ಶ್ರೀಗಂಧದ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪ ಇಲ್ಲದೇ ಇದ್ದುದರಿಂದ ಶ್ರೀಗಂಧದ ತುಂಡು ಮತ್ತು ಚೆಕ್ಕೆಯನ್ನು ಹಾಗೂ ಸಾಗಾಣಿಕೆಗೆ ಬಳಸಿದ ವಾಹನ ಬಜಾಜ್ ಎಮ್-80- ನೋಂದಣಿ ಸಂಖ್ಯೆ ಕೆಎ-15-ಇ-5111 ನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಮೊಕದ್ದಮೆ ಸಂಖ್ಯೆ 38/2001-02ನ್ನು ದಾಖಲು ಮಾಡಿರುತ್ತಾರೆ. ಮತ್ತು ವಾಹನದೊಂದಿಗೆ ದಸ್ತಗಿರಿ ಮಾಡಿದ 2 ಜನ ವ್ಯಕ್ತಿಗಳನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧದ ತುಂಡುಗಳು ಹಾಗೂ ಚಕ್ಕೆಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ 71ಎ ಕಲಂ ಎ ನಿಂದ ಎಫ್ ರವರೆಗೆ ಮುಂದಿನ ಕ್ರಮ ಕೈಗೊಳ್ಳಲು ಈ ಪ್ರಾಧಿಕಾರಕ್ಕೆ ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರು ಹಾಜರುಪಡಿಸಿದ್ದು, ಸದರಿ ವಾಹನ ಮತ್ತು ಸ್ವತ್ತನ್ನು ಪರಿಶೀಲಿಸಿ ಪ್ರಾಧಿಕಾರದಿಂದ ಮುಂದಿನ ಆದೇಶವಾಗುವವರೆಗೆ ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರ ಸುಪರ್ದಿಯಲ್ಲಿ ಸುರಕ್ಷತೆಗಾಗಿ ಇಟ್ಟುಕೊಳ್ಳಲು ಆದೇಶವಾಗಿರುತ್ತದೆ.

ನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ 30 ದಿನಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು/ ಮಾಲೀಕರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಯೊಂದಿಗೆ ಹಕ್ಕು ಭಾದ್ಯತೆಯನ್ನು ರುಜುವಾತುಪಡಿಸುವ ಸಲುವಾಗಿ, ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತುಪಡಿಸುವಂತೆ ಪ್ರಕಟಣೆಯನ್ನು ದಿನಾಂಕ: 12.09.2002ರ ವಿಜಯ ಕರ್ನಾಟಕ ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಿಸಲಾಗಿತ್ತು. ಹಾಗೂ ಪ್ರಕರಣದಲ್ಲಿ ಜಪ್ತಾದ ವಾಹನ ನೊಂದಣಿ ಸಂಖ್ಯೆ: ಕೆಎ-15-ಇ-5111ರ ಮಾಲೀಕರ ಹೆಸರು ಹಾಗೂ ವಿಳಾಸವನ್ನು ತಿಳಿಸುವಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಸಾಗರ ಇವರಲ್ಲಿ ದಿನಾಂಕ: 08.11.2001ರಂದು ಪತ್ರ ವ್ಯವಹರಿಸಲಾಗಿತ್ತು. ಸದರಿ ಪತ್ರಕ್ಕೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಸಾಗರ ಇವರಿಂದ ದಿನಾಂಕ: 12.11.2001ರ ಪತ್ರದಲ್ಲಿ ವಾಹನವು ಶ್ರೀ ಬಿ.ಆರ್. ಚಂದ್ರಶೇಖರ್ ಬಿನ್ ರುದ್ರಾನಾಯ್ಕ, ಹಾರೋಹಿತ್ಲು ಗ್ರಾಮ, ಹೊಸನಗರ ತಾಲ್ಲೂಕು ಇವರ ಹೆಸರಿನಲ್ಲಿರುತ್ತದೆ ಎಂಬುದಾಗಿ ತಿಳಿಸಿರುತ್ತಾರೆ. ಅದರಂತೆ, ಈ ಪ್ರಾಧಿಕಾರದಿಂದ ದಿನಾಂಕ: 23.11.2001ರಂದು ಶ್ರೀ ಬಿ.ಆರ್. ಚಂದ್ರಶೇಖರ್ ಬಿನ್ ರುದ್ರಾನಾಯ್ಕ ಇವರಿಗೆ ಕಾರಣ ಕೇಳಿ ಪತ್ರವನ್ನು ನೊಂದಾಯಿತ ಅಂಚೆ ಮೂಲಕ ಕಳುಹಿಸಿದ್ದು, ಪತ್ರ ಜಾರಿ ಆದ ಬಗ್ಗೆ ಸ್ವೀಕೃತಿ ಬಂದಿರುತ್ತದೆ. ಈ ಮಧ್ಯೆ ದಿನಾಂಕ: 28.02.2002ರಂದು ವಾಹನದ ಮಾಲೀಕರಾದ ಶ್ರೀ ಬಿ.ಆರ್. ಚಂದ್ರಶೇಖರ್ ಬಿನ್ ರುದ್ರಾನಾಯ್ಕ, ಹಾರೋಹಿತ್ಲು ಗ್ರಾಮ ಇವರು ತಮ್ಮ ವಕೀಲರ ಮುಖಾಂತರ ಹಾಜರಾಗಿ ಮಧ್ಯಂತರ ಆದೇಶದ ಮೇಲೆ ವಾಹನವನ್ನು ಬಿಡುಗಡೆಗೊಳಿಸುವಂತೆ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅರ್ಜಿದಾರರು ವಕೀಲರ ಮುಖಾಂತರ ಸಲ್ಲಿಸಿದ ಅರ್ಜಿಗೆ ಸಹಾಯಕ ಅಭಿಯೋಗ ನಿರ್ದೇಶಕರು ತಕರಾರು ಅರ್ಜಿ ಸಲ್ಲಿಸಿದ್ದರಿಂದ ವಾಹನವನ್ನು ಮಧ್ಯಂತರವಾಗಿ ಬಿಡುಗಡೆಗೊಳಿಸಿರುವುದಿಲ್ಲ.

ಈ ಪ್ರಕರಣದ ವಿಚಾರಣಾ ಕಾಲಕ್ಕೆ ಅಭಿಯೋಗದ ಪರವಾಗಿ ಶ್ರೀ ಸತೀಶ್ ಬಾಬಾ ರೈ, ವಲಯ ಅರಣ್ಯಾಧಿಕಾರಿ ಇವರ ಸಾಕ್ಷಿಯನ್ನು ಪ್ರಥಮ ಸಾಕ್ಷಿ 1 (ಪಿಡಬ್ಲ್ಯೂ-1) ಎಂದು ವಿಚಾರಣೆ ಮಾಡಿ ಹೇಳಿಕೆ ಪಡೆಯಲಾಯಿತು. ಪ್ರತಿವಾದಿಯ ಪರವಾಗಿ ಶ್ರೀ ಬಿ.ಆರ್. ಚಂದ್ರಶೇಖರ್, ವಾಹನದ ಮಾಲೀಕರು ಇವರನ್ನು ಅರ್ಜಿದಾರರ ಸಾಕ್ಷಿ 1 (ಡಿಡಬ್ಲ್ಯೂ-1) ವಿಚಾರಣೆ ಮಾಡಿ ಹೇಳಿಕೆ ಪಡೆಯಲಾಯಿತು. ಅನಂತರ ಅಭಿಯೋಗದ ಪರ ಸಹಾಯಕ ಅಭಿಯೋಗ ನಿರ್ದೇಶಕರು ಮತ್ತು ಅರ್ಜಿದಾರರ ಪರ ವಕೀಲರ ವಾದ-ವಿವಾದಗಳನ್ನು ಕೇಳಿದ ನಂತರ ಹಾಗೂ ಒದಗಿಸಿದ ಸಾಕ್ಷ್ಯಾಧಾರರಿಂದ ಈ ಕೆಳಗಿನ ಪರಿಶೀಲನಾಂಶಗಳನ್ನು ತೀರ್ಮಾನಿಸುವುದು ಅಗತ್ಯವೆಂದು ಭಾವಿಸಲಾಯಿತು.

1. ಅರ್ಜಿದಾರರ ವಾಹನ ಬಜಾಜ್ ಎಮ್-80 ನೊಂದಣಿ ಸಂಖ್ಯೆ: ಕೆಎ-15-ಇ-5111ರಲ್ಲಿ ದಿನಾಂಕ: 03.11.2001ರಂದು ಕಾನೂನು ಬಾಹಿರವಾಗಿ ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಯನ್ನು ಸಾಗಾಣಿಕೆ ಮಾಡಲು ಉಪಯೋಗಿಸುತ್ತಿದ್ದಾಗ ಅರಣ್ಯ ಇಲಾಖೆಯವರು ಜಪ್ತಿ ಮಾಡಲಾಗಿದೆ ಎಂದು ಅಭಿಯೋಗವು ತೃಪ್ತಿಕರವಾಗಿ ಸಿದ್ಧಪಡಿಸುವುದೇ?

2. ಅರ್ಜಿದಾರ ವಾಹನ ಮಾಲೀಕರು ಈ ವಾಹನವನ್ನು ಅಕ್ರಮ ಸಾಗಾಣಿಕೆಗೆ ಬಳಸಿರುವುದಿಲ್ಲ ಮತ್ತು ತನ್ನ ವಾಹನ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಬಳಸದಂತೆ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತೇನೆಂದು ಸಿದ್ಧಪಡಿಸುವರೆ?

3. ಯಾವ ಆದೇಶ?

ಮೇಲೆ ತಿಳಿಸಿದ ಪರಿಶೀಲನಾಂಶವನ್ನು ಲಭ್ಯವಿದ್ದ ಸಾಕ್ಷ್ಯಾಧಾರದ ಮೇಲೆ ಈ ಕೆಳಕಂಡಂತೆ ಉತ್ತರಿಸುತ್ತೇನೆ.

1. ಕ್ಕೆ ಗುಣಾತ್ಮಕವಾಗಿ.

2. ಕ್ಕೆ ನಕರಾತ್ಮಕವಾಗಿ.

3. ಕ್ಕೆ ಕೊನೆಯ ಆದೇಶದಂತೆ.

**ಅಂಶ-1**

ಅಭಿಯೋಗವು ತನ್ನ ಪರವಾಗಿ ಒಂದು ಸಾಕ್ಷಿಯನ್ನು ವಿಚಾರಣೆ ಮಾಡಿದ್ದು, ಅಭಿಯೋಜನಾ ಸಾಕ್ಷಿ-1 ಶ್ರೀ ಸತೀಶ್ ಬಾಬಾ ರೈ, ವಲಯ ಅರಣ್ಯಾಧಿಕಾರಿಯು ಮುಖ್ಯ ವಿಚಾರಣೆಯಲ್ಲಿ ದಿನಾಂಕ: 03.11.2001ರಂದು ಬೆಳಗಿನ ಜಾವ ಅಂದಾಜು 2.25ರ ಸಮಯದಲ್ಲಿ ಹಾರೋಹಿತ್ಲು-ಬೆಳ್ಳೂರು ರಸ್ತೆಯ ಮೂಲಕ ಗಸ್ತು ಮುಗಿಸಿ ಸಿರಿಗೆರೆಗೆ ಮರಳಿ ಬರುತ್ತಿರುವಾಗ ಅಡ್ಡೇರಿ ಕ್ರಾಸ್ ಬಳಿ ದ್ವಿಚಕ್ರ ವಾಹನದಲ್ಲಿ ಇಬ್ಬರು

ಬರುತ್ತಿರುವುದನ್ನು ಕಂಡು ವಾಹನವನ್ನು ನಿಲ್ಲಿಸಲು ಸೂಚಿಸಿದ್ದಾಗ್ಯೂ ನಿಲ್ಲಿಸದೇ ಮುಂದಾದಾಗ ಇಲಾಖಾ ವಾಹನದಲ್ಲಿ ಬೆನ್ನಟ್ಟಿ ವಾಹನವನ್ನು ಆಸಾಮಿಗಳೊಂದಿಗೆ ತಡೆದು ನಿಲ್ಲಿಸಿ ನೋಡಿದಾಗ, ತುಂಬಿದ ಚೀಲದ ಮೂಟೆ ಇರುವುದು ಕಂಡು ಬಂದಿತು. ಸದರಿ ಚೀಲವನ್ನು ಬಿಚ್ಚಿ ನೋಡಲಾಗಿ, ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳಿರುವುದು ಕಂಡುಬಂದ ಮೇರೆಗೆ, ವಾಹನದ ಸವಾರರ ಹತ್ತಿರ ಇವುಗಳ ಸಾಗಾಣಿಕೆಗೆ ರಹದಾರಿ ಇದೆಯೇ ಎಂದು ವಿಚಾರಿಸಿದಾಗ, ಯಾವುದೇ ರಹದಾರಿ ಇಲ್ಲವೆಂದು ತಿಳಿದ ಮೇರೆಗೆ, ಅರಣ್ಯ ಉತ್ಪನ್ನವನ್ನು ಅಕ್ರಮ ಸಾಗಾಣಿಕೆ ಮಾಡಲಾಗುತ್ತಿದೆ ಎಂದು ಮನಗಂಡು, ಸ್ಥಳದಲ್ಲಿ ಪಂಚನಾಮೆ ಕ್ರಮವನ್ನು ಜರುಗಿಸಿದ್ದು, ರಾತ್ರಿಯ ವೇಳೆಯಾದ್ದರಿಂದ ಸಾರ್ವಜನಿಕರು ಸಿಗದೇ ಇದ್ದ ಕಾರಣದಿಂದ ಇಲಾಖೆಯವರನ್ನೆ ಪಂಚರನ್ನಾಗಿ ಮಾಡಿ ಮಹಜರನ್ನು ತಯಾರಿಸಿದ್ದು, ಶ್ರೀಗಂಧದ ತುಂಡುಗಳ ಮೇಲೆ ಇಲಾಖಾ ಛಾಪವನ್ನು ಅಚ್ಚಿಸಿ, ದಪ್ಪವಿರುವ ತುಂಡಿನ ಮೇಲೆ ಗುನ್ನೆ ನಂಬರನ್ನು ಬರೆಯಲಾಗಿರುತ್ತದೆ. ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ದ್ವಿಚಕ್ರ ವಾಹನ ಬಜಾಜ್ ಎಮ್-80 ನೋಂದಣಿ ಸಂಖ್ಯೆ: ಕೆಎ-15-ಇ-5111 ಶ್ರೀಗಂಧದ ತುಂಡುಗಳು ಅಂದಾಜು ತೂಕ 4.00 ಕೆ.ಜಿ. ಮತ್ತು ಚಕ್ಕೆಗಳು $3^1/_2$ ಕೆ.ಜಿ. ಮತ್ತು ಪ್ಲಾಸ್ಟಿಕ್ ಚೀಲವನ್ನು ಸರ್ಕಾರದ ಪರ ಅಮಾನತ್ತು ಪಡಿಸಲಾಯಿತು ಎಂಬುದಾಗಿ ನುಡಿಯುತ್ತಾ, ಹಾಗೂ ಬಂಧಿತ ಆರೋಪಿಗಳಾದ ಶ್ರೀ ರತ್ನಾಕರ ಮತ್ತು ಮೊಹಿದ್ದೀನ್ ಎಂಬುವರನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಯಿತು ಎಂದು ನುಡಿದಿರುತ್ತಾರೆ.

ಈ ಸಾಕ್ಷಿಯ ಮೂಲಕ ಸ್ಥಳ ಮಹಜರ್ ವರದಿಯನ್ನು ನಿಶಾನೆ ಪಿ-1, ಅದರಲ್ಲಿನ ಸಹಿಯನ್ನು ನಿಶಾನೆ ಪಿ-1ಎ, ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ-2, ಅದರಲ್ಲಿನ ಸಹಿಯನ್ನು ನಿಶಾನೆ ಪಿ-2ಎ, ಅಮಾನತ್ತು ವರದಿಯನ್ನು ನಿಶಾನೆ ಪಿ-3, ಅದರಲ್ಲಿನ ಸಹಿಯನ್ನು ನಿಶಾನೆ ಪಿ-3ಎ, ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಸಲ್ಲಿಸಿದ ವರದಿಯನ್ನು ನಿಶಾನೆ ಪಿ-4, ಅದರಲ್ಲಿನ ಸಹಿಯನ್ನು ನಿಶಾನೆ ಪಿ-4ಎ ಎಂದು ಗುರುತಿಸಲ್ಪಟ್ಟಿದೆ.

ಈ ಸಾಕ್ಷಿಯು ಪಾಟೀ ಸವಾಲಿನಲ್ಲಿ ಮಹಜರ್ ಕಾಲಕ್ಕೆ ಚಕ್ಕುಬಂದಿ ಹಾಕಲಾಗಿರುವುದು ನೆನಪಿಲ್ಲ, ಘಟನೆ ನಡೆದ ಸ್ಥಳ ಹಾರೋಹಿತ್ತಲು ಮನ್ನಾಜಂಗಲಿಯಾಗಿರುತ್ತದೆ, ಘಟನೆ ಸ್ಥಳಕ್ಕೂ ಹಾರೋಹಿತ್ತಲು ಗ್ರಾಮಕ್ಕೂ ಸುಮಾರು 1 ಕಿ.ಮೀ. ದೂರವಿರುತ್ತದೆ. ಘಟನಾ ಸ್ಥಳದ ಅಕ್ಕಪಕ್ಕ ಮನೆಗಳಿರುತ್ತವೆ ಎನ್ನುವುದು ನಿಜವಲ್ಲ. ದಿನಾಂಕ: 03.11.2001ರಂದು ಬೆಳಗಿನ ಜಾವ ಅಂದಾಜು 2.25ರ ಸುಮಾರಿನಲ್ಲಿ ಮಹಜರ್ ಬರೆಯಲು ಶುರುಮಾಡಲಾಗಿರುತ್ತದೆ. ಸ್ಥಳದಲ್ಲಿ ಮಹಜರ್ ಮಾಡಲಿಲ್ಲ ಎನ್ನುವುದು ನಿಜವಲ್ಲ, ಸ್ಥಳದಲ್ಲಿಯೇ ಸ್ಪ್ರಿಂಗ್ ತೂಕದ ಮಾಪನದಿಂದ ಶ್ರೀಗಂಧದ ತುಂಡುಗಳ ತೂಕ ಮಾಡಲಾಗಿರುತ್ತದೆ. ಮಹಜರನ್ನು ಶ್ರೀ ಅಶೋಕ್, ಅರಣ್ಯ ರಕ್ಷಕ ಇವರು ಬರೆದಿದ್ದು, ಘಟನೆ ಸ್ಥಳವು ಬೆಳ್ಳೂರ್-ಹಾರೋಹಿತ್ತಲು ರಸ್ತೆಯ ಅಡ್ಡೇರಿ ಕ್ರಾಸ್ ಬಳಿ ಎಂದು ನುಡಿದಿರುತ್ತಾರೆ. ಜಪ್ತಿಪಡಿಸಿದ ದ್ವಿಚಕ್ರ ವಾಹನದ ಮೇಲೆ ಶ್ರೀಗಂಧದ ತುಂಡುಗಳು ಇರಲಿಲ್ಲ ಎನ್ನುವುದು ನಿಜವಲ್ಲ, ಆ ದಿನ ನಾವು ಸ್ಥಳಕ್ಕೆ ಹೋಗಿಲ್ಲ ಎನ್ನುವುದು ನಿಜವಲ್ಲ, ಹಾಗೂ ಈ ದ್ವಿಚಕ್ರ ವಾಹನಕ್ಕೂ ಈ ಪ್ರಕರಣಕ್ಕೂ ಸಂಬಂಧವಿರುವುದಿಲ್ಲ ಎನ್ನುವುದು ನಿಜವಲ್ಲವೆಂದು ತಿಳಿಸಿರುತ್ತಾರೆ. ಪಾಟೀ ಸವಾಲಿನಲ್ಲಿ ಮುಖ್ಯ ವಿಚಾರಣೆಯಲ್ಲಿ ನುಡಿದ ಸಾಕ್ಷ್ಯಕ್ಕೆ ಈ ಸಾಕ್ಷಿಯು ಪೂರಕವಾಗಿ ಹೇಳಿದ್ದರಿಂದ ಯಾವುದೇ ಸಂದರ್ಭದಲ್ಲಿಯೂ ನಂಬಲಾರದ ಅಥವಾ ತಿರಸ್ಕರಿಸುವಂತಹ ಸಾಕ್ಷ್ಯವು ಬಂದಿರುವುದಿಲ್ಲ, ಹಾಗೂ ಸ್ಥಳದಲ್ಲಿ ತಯಾರಿಸಿದ ಮಹಜರ್ ಮತ್ತು ಪ್ರಥಮ ಮಾಹಿತಿ ವರದಿಯು ಈ ಸಾಕ್ಷಿದಾರರ ಹೇಳಿಕೆಯನ್ನು ಪುಷ್ಟೀಕರಿಸುತ್ತದೆ.

ಆದ್ದರಿಂದ ಅಭಿಯೋಗವು ಮೇಲೆ ತಿಳಿಸಿದ ಸಾಕ್ಷಿಯಿಂದ, ದಿನಾಂಕ: 03.11.2001ರಂದು ಅರ್ಜಿದಾರ ಬಜಾಜ್ ಎಮ್-80 ನೋಂದಣಿ ಸಂಖ್ಯೆ: ಕೆಎ-15-ಇ-5111ರಲ್ಲಿ ಅಕ್ರಮ ಶ್ರೀಗಂಧದ ತುಂಡುಗಳು ಹಾಗೂ ಚಕ್ಕೆಗಳನ್ನು ಸಾಗಾಣಿಕೆ ಮಾಡುತ್ತಿದ್ದಾಗ ಅರಣ್ಯ ಇಲಾಖೆಯವರು ಜಪ್ತು ಮಾಡಿರುತ್ತಾರೆಂದು ತೃಪ್ತಿಕರವಾಗಿ ಸಿದ್ಧಪಡಿಸಿರುವುದರಿಂದ ಪರಿಶೀಲನಾಂಶ ಒಂದನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇನ್ನೂ ವಿವಾದಾಂಶ 2ಕ್ಕೆ ಕುರಿತು ಅರ್ಜಿದಾರರು ತನ್ನನ್ನು ಮಾತ್ರ ವಿಚಾರಣೆ ಮಾಡಿಕೊಂಡಿದ್ದು, ತನ್ನ ಸಾಕ್ಷ್ಯದಲ್ಲಿ ಬಜಾಜ್ ಎಮ್-80 ನೋಂದಣಿ ಸಂಖ್ಯೆ: ಕೆಎ-15-ಇ-5111 ರ ಮಾಲೀಕನಾದ ನಾನು ದಿನಾಂಕ: 02.11.2001ರಂದು ನಮ್ಮ ಮನೆಯ ಮುಂದೆ ಅಡಿಕೆಯ ಚಪ್ಪರದ ಕೆಳಗೆ ಇರಿಸಿದ ವಾಹನ ಕಳುವಾಗಿದ್ದು, ಸದರಿ ವಾಹನ ಹುಡುಕಿದರೂ ಸಿಕ್ಕಿರಲಿಲ್ಲ, ಒಂದು ತಿಂಗಳಾದ ನಂತರ ಸಿರಿಗೆರೆ ವಲಯ ಕಛೇರಿಯಿಂದ ವಾಹನ ಜಪ್ತು ಮಾಡಲಾಗಿದೆ ಎಂದು ನೋಟೀಸ್ ಬಂದ ಮೇಲೆ ವಾಹನ ಬಿಡುಗಡೆಗಾಗಿ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿದ್ದೇನು, ಹಾಗೂ ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ನನ್ನ ವಾಹನ ಶಾಮೀಲಾಗಿರುವುದಿಲ್ಲ ಮತ್ತು ಕಳ್ಳ ಸಾಗಾಣಿಕೆಗಾಗಿ ವಾಹನವನ್ನು ಯಾರಿಗೂ ಕೊಟ್ಟಿರುವುದಿಲ್ಲವೆಂದು ನುಡಿದಿರುತ್ತಾರೆ. ಸಾಕ್ಷಿಯ ಸಮಯದಲ್ಲಿ ಹಾಜರುಪಡಿಸಿದ ವಾಹನದ ಮೂಲ ಆರ್.ಸಿ. ಪುಸ್ತಕವನ್ನು ನಿಶಾನೆ ಡಿ-1 ಎಂದು, ಇದರ ನಕಲು ಪ್ರತಿಯನ್ನು ನಿಶಾನೆ ಡಿ-1ಎ ಎಂದು ಗುರುತಿಸಲಾಗಿದೆ.

ಪಾಟೀ ಸವಾಲಿನಲ್ಲಿ ದಿನಾಂಕ: 28.02.2002ರಂದು ಪ್ರಾಧಿಕಾರಕ್ಕೆ ಸಲ್ಲಿಸಿದ ಅರ್ಜಿಯಲ್ಲಿ ವಾಹನ ಕಳುವು ಆದ ಬಗ್ಗೆ ಪೊಲೀಸ್‌ರವರಿಗೆ ದೂರು ನೀಡಿರುವುದಿಲ್ಲ ಎನ್ನುವ ವಿಚಾರವನ್ನು ನಮೂದು ಮಾಡಲಾಗಿತ್ತು ಎಂಬುದಾಗಿ ನುಡಿದಿರುತ್ತಾರೆ. ಆದರೆ, ಸದರಿ ಅರ್ಜಿಯಲ್ಲಿ ಈ ವಿಚಾರವನ್ನು ಪ್ರಸ್ತಾಪಿಸಿರುವುದಿಲ್ಲ.

ವಾಹನವನ್ನು ಅರಣ್ಯ ಮೊಕದ್ದಮೆಯಲ್ಲಿ ಜಪ್ತುಪಡಿಸಿರುವುದು ಗೊತ್ತಾದ ಮೇಲು ಅರ್ಜಿದಾರರು ಸಿರಿಗೆರೆಯ ವಲಯ ಅರಣ್ಯಾಧಿಕಾರಿಗಾಗಲೀ ಅಥವಾ ಹತ್ತಿರದ ಪೊಲೀಸ್ ಠಾಣೆಗಾಗಲೀ ವಾಹನ ಕಳ್ಳತನವಾದ ಬಗ್ಗೆ ದೂರು ನೀಡದೇ ದಿನಾಂಕ: 28.02.2002ರಂದು ಈ ಪ್ರಾಧಿಕಾರಕ್ಕೆ ವಾಹನವನ್ನು ಮಧ್ಯಂತರ ಆದೇಶದ ಮೇಲೆ ಬಿಡುಗಡೆಗೆ ಕೋರಿರುತ್ತಾರೆ. ವಾಹನ ಕಳುವಾದಾಗ ಪೊಲೀಸ್ ಠಾಣೆಗೆ ದೂರು ನೀಡಬೇಕು ಎಂದು ಗೊತ್ತಿದ್ದರೂ ಸಹ ನೀಡಲಾಗಿರುವುದಿಲ್ಲ ಎಂಬ ಅಂಶವನ್ನು ಸ್ಪಷ್ಟವಾಗಿ ತಿಳಿಸಿರುವುದನ್ನು ಗಮನಿಸಿದಲ್ಲಿ ಈ ಆರೋಪದಲ್ಲಿ ಇವರು ಸಹ ಭಾಗಿಯಾಗಿರಬಹುದೆಂದು ಸಂಶಯಕ್ಕೆ ಎಡೆ ಮಾಡಿಕೊಡುತ್ತದೆ.

ಈ ಸಾಕ್ಷಿಯ ಪಾಟಿ ಸವಾಲಿನಲ್ಲಿ ದಿನಾಂಕ: 03.11.2001ರಂದು ಬೆಳಿಗ್ಗೆ 6.00 ಗಂಟೆಗೆ ತನ್ನ ವಾಹನ ಕಳ್ಳತನವಾಗಿರುವುದು ಗಮನಕ್ಕೆ ಬಂದಿತೆಂದು ತಿಳಿಸಿರುತ್ತಾರೆ. ಹಾಗೂ ವಾಹನ ಕಳುವಾದಾಗ ಪೊಲೀಸ್‌ನವರಿಗೆ ದೂರು ಕೊಡಬೇಕು ಎನ್ನುವುದು ತನಗೆ ಗೊತ್ತೆಂದು ತಿಳಿಸಿರುತ್ತಾರೆ. ದಿನಾಂಕ: 03.11.2001ರಂದು ವಾಹನ ಕಳ್ಳತನವಾಗಿದೆ ಎಂದು ಗೊತ್ತಾದ ನಂತರ ಪೊಲೀಸ್‌ರವರಿಗಾಗಲೀ, ಅಥವಾ ಈ ಪ್ರಾಧಿಕಾರಕ್ಕಾಗಲೀ ಯಾವುದೇ ದೂರನ್ನು ನೀಡಿರುವುದಿಲ್ಲ. ಅಲ್ಲದೇ ವಾಹನ ಕಳ್ಳತನವಾದ ಬಗ್ಗೆ ಪೊಲೀಸ್‌ರವರಿಗೆ ದೂರು ಕೊಡಬೇಕು ಎಂಬ ವಿಷಯ ಗೊತ್ತಿದ್ದರೂ ಸಹ ಯಾವ ಕಾರಣಕ್ಕಾಗಿ ದೂರು ನೀಡಿಲ್ಲವೆಂಬ ಬಗ್ಗೆ ಸಮಂಜಸ ಕಾರಣವನ್ನು ನ್ಯಾಯಾಲಯಕ್ಕೆ ತಿಳಿಸುವಲ್ಲಿ ವಿಫಲರಾಗಿರುತ್ತಾರೆ. ಹಾಗೂ ಈ ವಿಷಯವನ್ನು ಈ ಪ್ರಾಧಿಕಾರಕ್ಕೆ ದಿನಾಂಕ: 28.02.2002ರಂದು ನೀಡಿದ ಅರ್ಜಿಯಲ್ಲಿಯೂ ಸಹ ನಮೂದಿಸಿರುವುದಿಲ್ಲ. ಇದರಿಂದ ಇವರ ಹೇಳಿಕೆ ನಂಬಲು ಯಾವುದೇ ಆಧಾರವಲ್ಲವೆಂದು ಹೇಳಬಹುದು. ಕಾರಣ ಅರ್ಜಿದಾರರ ವಾಹನ ದಿನಾಂಕ: 03.11.2001ರಂದು ಕಳ್ಳತನವಾಗಿದೆ ಅಂದು ಗೊತ್ತಿದ್ದೂ, ಹಾಗೂ ಸದರಿ ವಾಹನ ಶ್ರೀಗಂಧದ ಅಕ್ರಮ ಕೃತ್ಯದಲ್ಲಿ ಅರಣ್ಯ ಇಲಾಖೆಯವರು ವಶಪಡಿಸಿಕೊಂಡ ಬಗ್ಗೆ ಪ್ರಾಧಿಕಾರದಿಂದ ಕಾರಣ ಕೇಳಿ

ಪತ್ರವನ್ನು ದಿನಾಂಕ: 23.11.2001 ಪತ್ರ ಇರುತ್ತದೆ. ವಾಹನ ಮಾಲೀಕರಿಗೆ ವಾಹನದ ಮಾಹಿತಿ ಗೊತ್ತಾಗ್ಯೂ ಕೂಡ ಈ ಪ್ರಾಧಿಕಾರಕ್ಕೆ ದಿನಾಂಕ: 28.02.2002ರಂದು ಅರ್ಜಿ ಸಲ್ಲಿಸಿರುವುದು ಕಂಡುಬರುತ್ತದೆ. ಹಾಗೂ 3 ತಿಂಗಳಷ್ಟು ತಡವಾಗಿದ್ದಕ್ಕೂ ಸಮಂಜಸ ಕಾರಣ ನಮೂದಿಸಿರುವುದಿಲ್ಲ. ಇದರಿಂದ ವಾಹನದ ಮಾಲೀಕರಿಗೆ ವಾಹನದ ಉಸ್ತುವಾರಿಯ ಬಗ್ಗೆ ನಿರಾಸಕ್ತಿ ಇರುವುದು ಕಂಡುಬರುತ್ತದೆ. ಹಾಗೂ ಅರ್ಜಿಯಲ್ಲಿ ನಮೂದಿಸಿದ ಸಂಗತಿ ಕಪೋಲ ಕಲ್ಪಿತವೆಂದು ತಿಳಿದುಬರುತ್ತದೆ. ಹಾಗೂ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಯನ್ನು ಪರಿಶೀಲಿಸಲಾಗಿ, ಇವರ ಹೇಳಿಕೆ ಕಾಲ್ಪನಿಕ ಎಂಬುದಾಗಿ ತಿಳಿದು ಬರುತ್ತದೆ.

ಫಿರ್ಯಾದುದಾರರು ಈ ಪ್ರಕರಣದಲ್ಲಿ ಸುಳ್ಳು ಪ್ರಕರಣವನ್ನು ಸೃಷ್ಟಿ ಮಾಡಲು ಯಾವುದೇ ಕಾರಣವಿರುವುದು ಸಾಕ್ಷಿ ಆಧಾರದಿಂದ ಕಂಡುಬರುವುದಿಲ್ಲ. ಅದಲ್ಲದೇ ಅಭಿಯೋಜನಾ ಪರ ಪ್ರಾಸಿಕ್ಯೂಷನ್ ಸಾಕ್ಷಿ1ರ ಹೇಳಿಕೆ ಹಾಗೂ ಹಾಜರುಪಡಿಸಲಾದ ದಾಖಲಾತಿಗಳು ಈ ಪ್ರಕರಣದ ಆರೋಪಣೆಯನ್ನು ನಿಸ್ಸಂದೇಹವಾಗಿ ಸಾಬೀತುಪಡಿಸುತ್ತದೆ. ಈ ಕಾರಣಗಳಿಂದ ವಾಹನ ಮಾಲೀಕರು ತನಗೆ ತಿಳಿಯದೆ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಾಣಿಕೆ ಮಾಡಲು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ.

ವಾಹನದ ಮಾಲೀಕರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿ ಮತ್ತು ಸಾಕ್ಷಿದಾರರು ಈ ನ್ಯಾಯಾಲಯದಲ್ಲಿ ನುಡಿದ ಹೇಳಿಕೆಯನ್ನು ಗಮನಿಸಿದಾಗ ಒಂದಕ್ಕೊಂದು ತಾಳೆ ಇಲ್ಲದೆ ವಾಹನವನ್ನು ಬಿಡಿಸಿಕೊಳ್ಳಲು ಸೃಷ್ಟಿಸಿದ ಕಟ್ಟುಕಥೆಯೆಂದು ಅಭಿಪ್ರಾಯಪಡುತ್ತೇನೆ.

ಕರ್ನಾಟಕ ಉಚ್ಚ ನ್ಯಾಯಾಲಯದ ಪ್ರಕಟಿತ ತೀರ್ಪು 142:1985 ಪುಟ 2571 ರಲ್ಲಿ ಶ್ರೀ ರಮೇಶ್ ದೀಕ್ಷಿತ್ ವಿರುದ್ಧ ಕರ್ನಾಟಕ ರಾಜ್ಯ ಇದರಲ್ಲಿ ತಿಳಿಸಿದ ಪ್ರಕಾರ ಅರ್ಜಿದಾರರು ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಿರುವುದಿಲ್ಲ. ಹಾಗೂ ಈ ಕೇಸಿನಲ್ಲಿ ಶಾಮೀಲಾಗಿಲ್ಲ ಎಂಬುದರ ಬಗ್ಗೆ ರುಜುವಾತುಪಡಿಸಿರುವುದಿಲ್ಲ. ಹಾಗೂ ವಾಹನ ಮಾಲೀಕರು ವಾಹನದ ಬಗ್ಗೆ ಯಾವುದೇ ಮುಂಜಾಗ್ರತಾ ಕ್ರಮ ಕೈಗೊಂಡಿಲ್ಲ ಎಂದು ಪೂರ್ಣವಾಗಿ ಸಾಭೀತಾಗುತ್ತದೆ.

ಮೇಲ್ಕಂಡ ಎಲ್ಲಾ ಸಾಕ್ಷ್ಯ ಹಾಗೂ ದಾಖಲಾತಿಯಿಂದ ಅರ್ಜಿದಾರರು ತನ್ನ ಜವಾಬ್ದಾರಿಯನ್ನು ಸಿದ್ಧಗೊಳಿಸುವಲ್ಲಿ ವಿಫಲರಾಗಿದ್ದರಿಂದ, ಪರಿಶೀಲನಾಂಶ 2ಕ್ಕೆ ನಕರಾತ್ಮಕವಾಗಿ ಪರಿಗಣಿಸಿ, ಪರಿಶೀಲನಾಂಶ 3ಕ್ಕೆ ಈ ಕೆಳಕಂಡಂತೆ ಆದೇಶಿಸಿದ್ದೇನೆ.

**ಆದೇಶ**

ಮೇಲ್ಕಂಡ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ, ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು, 1963ರ ಕರ್ನಾಟಕ ಅರಣ್ಯ ಅಧಿನಿಯಮ 71ಎ ಪ್ರಕಾರ, ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಬಜಾಜ್ ಎಮ್-80 ನೊಂದಣಿ ಸಂಖ್ಯೆ: ಕೆಎ-15-ಇ-5111 ಎಂದು, ಇಂಜೀನ್ ಸಂಖ್ಯೆ: 16ಇ-96ಎ47740, ಛಾಸ್ಸಿ ಸಂಖ್ಯೆ: 16ಸಿ-96ಎ-47507 ಮತ್ತು 4.00 ಕೆ.ಜಿ. ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳು $3^1/_2$ ಕೆ.ಜಿ.ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಸದರಿ ವಾಹನವು ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ. ಮುಟ್ಟುಗೋಲು ಹಾಕಿಕೊಂಡ ಶ್ರೀಗಂಧವನ್ನು ಈ ಪ್ರಕರಣದಲ್ಲಿ ಆಪಾಧಿತರ ಮೇಲೆ ನಡೆಯುತ್ತಿರುವ ಕ್ರಿಮಿನಲ್ ಕೇಸ್ ಮುಕ್ತಾಯವಾಗುವವರೆವಿಗೂ ಕಾಯ್ದುಕೊಳ್ಳುವಂತೆ ಆದೇಶಿಸಲಾಗಿದೆ.

ಈ ಆದೇಶವು ಈ ದಿನಾಂಕ: 20.01.2006ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಸದರಿ ಆದೇಶವನ್ನು ಹೊರಡಿಸಿದ 30 ದಿನಗಳ ಒಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸದೇ ಇದ್ದರೆ, ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಈ ಆದೇಶವು ದಿನಾಂಕ: 20.01.2006ರಂದು ಗಣಕ ಯಂತ್ರದಲ್ಲಿ ಬೆರಳಚ್ಚಿಸಿ ತೆರೆದ ನ್ಯಾಯಾಲಯದಲ್ಲಿ ಉದ್ಘೋಷಿಸಿ, ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

**ವಿಚಾರಣೆ ಮಾಡಲ್ಪಟ್ಟ ಸಾಕ್ಷಿಗಳು:**

**1. ಅಭಿಯೋಜನಾ ಪರ ಸಾಕ್ಷಿ:**

ಅ) ಶ್ರೀ ಎಸ್.ಎನ್. ಸತೀಶ್ ಬಾಬಾ ರೈ, ವಲಯ ಅರಣ್ಯಾಧಿಕಾರಿ, (ಹಿಂದಿನ) ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ — ಪಿಡಬ್ಲ್ಯೂ-1

**2. ಅರ್ಜಿದಾರರ ಪರ ಸಾಕ್ಷಿಗಳು:**

ಅ) ಶ್ರೀ ಬಿ.ಆರ್. ಚಂದ್ರಶೇಖರ್ ಬಿನ್ ರುದ್ರನಾಯ್ಕ, ಹಾರೋಹಿತ್ಲು ಗ್ರಾಮದ ವಾಸಿ ತೀರ್ಥಹಳ್ಳಿ ತಾಲ್ಲೂಕು. — ಡಿಡಬ್ಲ್ಯೂ-1

**3. ಅಭಿಯೋಜನಾ ಪರ ನಿಶಾನಿಸಲ್ಪಟ್ಟ ದಾಖಲೆಗಳು:**

1. ಸ್ಥಳ ಮಹಜರ್ - ನಿಶಾನೆ ಪಿ1
2. ಪ್ರಥಮ ಮಾಹಿತಿ ವರದಿ - ನಿಶಾನೆ ಪಿ2
3. ಅಮಾನತ್ತು ವರದಿ - ನಿಶಾನೆ ಪಿ3
4. ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸಲ್ಲಿಸಿದ ವರದಿ - ನಿಶಾನೆ ಪಿ4

**4. ಅರ್ಜಿದಾರರ ಪರ ಗುರುತಿಸಲ್ಪಟ್ಟ ದಾಖಲೆಗಳು:**

1. ವಾಹನದ ಮೂಲ ಆರ್.ಸಿ. ಪುಸ್ತಕ - ನಿಶಾನೆ ಡಿ1
2. ವಾಹನದ ಆರ್.ಸಿ. ಪುಸ್ತಕ ಜರಾಕ್ಸ್ ಪ್ರತಿ - ನಿಶಾನೆ ಡಿ1ಎ

**ಜಿ.ಎ.ಎನ್. ಕರ್ಕೀಕರ್**
ಪಿಆರ್. 236 ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

## ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೊರಟಗೆರೆ

### ಜಿ.ಟಿ.: 05, ದಿನಾಂಕ:6ನೇ ಜನವರಿ, 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ದಿನಾಂಕ: 27.04.2006ರಂದು ಬೆಳಿಗ್ಗೆ 11.00 ಗಂಟೆಗೆ ಕೊರಟಗೆರೆ ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ಈ ಕೆಳಗೆ ನಮೂದು ಮಾಡಿರುವ ಮುದ್ದೆಮಾಲುಗಳನ್ನು ಬಹಿರಂಗ ಹರಾಜು ಮಾಡಲಾಗುವುದು. ಇಚ್ಛೆವುಳ್ಳ ವ್ಯಕ್ತಿಗಳು ಈ ಹರಾಜಿನಲ್ಲಿ ಭಾಗವಹಿಸಿ ಬಿಡ್ ಮಾಡಬಹುದು. ಯಾರ ಹೆಸರಿಗೆ ಬಿಡ್ ನಿಲ್ಲುವುದೋ ಅವರು ಸ್ಥಳದಲ್ಲಿಯೇ ಹಣವನ್ನು ಪಾವತಿ ಮಾಡಿ ಸಂಬಂಧಪಟ್ಟವರು ತೆಗೆದುಕೊಂಡು ಹೋಗತಕ್ಕದ್ದು. ಬಿಡ್ಡನ್ನು ಪುರಸ್ಕರಿಸುವುದು ಅಥವಾ ತಿರಸ್ಕರಿಸುವುದು ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ ರವರಿಗೆ ಸೇರಿದ್ದು.

| ಕ್ರಮ ಸಂಖ್ಯೆ | ಕೇಸ್ ನಂಬರ್ | ಪಿ.ಆರ್. ನಂ. | ಹರಾಜು ಮತ್ತು ಸ್ವತ್ತುಗಳು |
|---|---|---|---|
| 1. | ಸಿ.ಸಿ. ನಂ.9-04 | 44-04 | ಬಜಾಜ್ ಸ್ಕೂಟರ್ ನಂ. ಸಿಟಿಒ-1169, ಇಂಜೀನ್ ನಂ.06 ಈ-2210 ಚಾಸಿ ನಂ.259438. |
| 2. | ಸಿ.ಸಿ. ನಂ.3-04 | 60-04 | ಒಂದು 5 ಹೆಚ್.ಪಿ. ಹಾಗೂ 3 ಹೆಚ್.ಪಿ. ಮೋಟಾರ್ ಮತ್ತು ಎರಡು ಬೆಡ್ಡಿಂಗ್ ಅಂಗರ್‌ಗಳು. |

ಸಿವಿಲ್ ಜಡ್ಜ್ (ಕಿ.ವಿ.), ಜೆಎಂಎಫ್‌ಸಿ,
ಕೊರಟಗೆರೆ.

ಪಿಆರ್. 237

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ

### ಪ್ರಕಟಣೆ

### ಸಂಖ್ಯೆ: ಎ3:ಅಮೊ: ಶ್ರೀಗಂಧ: ಬಜಾಜ್-ಎಂ-80: 2553:2005-06, ದಿನಾಂಕ:30ನೇ ಜನವರಿ, 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ವಾಹನವನ್ನು ವಲಯ ಅರಣ್ಯಾಧಿಕಾರಿ ಸಕ್ರೆಬೈಲು ವನ್ಯಜೀವಿ ವಲಯ ಇವರು ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಅಧಿನಿಯಮ 71ಎ ಪ್ರಕಾರ ಮುಂದಿನ ದಾವೆ ನಡೆಸಲು ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿಗಳು ಈ ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಆದುದರಿಂದ ಸದರಿ ವಾಹನಗಳನ್ನು ಸರ್ಕಾರಕ್ಕೆ ಏಕೆ? ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಯಾವುದೇ ಹಕ್ಕು ಬಾಧ್ಯತೆಗಳನ್ನು ರುಜುವಾತುಪಡಿಸುವುದಿದ್ದಲ್ಲಿ ಅಂತಹ ವ್ಯಕ್ತಿಗಳು ತಮ್ಮಲ್ಲಿರುವ ವಾಹನದ ಮಾಲಿಕತ್ವದ ಮೂಲ ದಾಖಲಾತಿಗಳೊಂದಿಗೆ ಈ ಪ್ರಕಟಣೆಯು ಪ್ರಕಟವಾದ 30 ದಿವಸಗಳೊಳಗಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ರುಜುವಾತುಪಡಿಸುವುದು ನಿಗದಿತ ಅವಧಿಯ ನಂತರ ಬಂದ ಯಾವುದೇ ಅಹವಾಲನ್ನು ಪರಿಗಣಿಸಲಾಗುವುದಿಲ್ಲ ಹಾಗೂ 1963ರ ಕರ್ನಾಟಕ ಅರಣ್ಯ ಕಾಯಿದೆ 71ಎ ಯಿಂದ ಎಫ್ ವರೆಗಿನ ವಿದಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದೆಂದು ತಿಳಿಸಲಾಗಿದೆ.

| ಕ್ರಮ ಸಂಖ್ಯೆ | ಅ.ಮೋ. ಸಂಖ್ಯೆ | ವಾಹನದ ವಿವರ ಹಾಗೂ ನೋಂದಣಿ ಸಂಖ್ಯೆ | ಇಂಜಿನ್ ಸಂಖ್ಯೆ | ಚಾಸಿಸ್ ಸಂಖ್ಯೆ |
|---|---|---|---|---|
| 1. | 17/ 2005-06 ಸಕ್ರೆಬೈಲು ವನ್ಯಜೀವಿ ವಲಯ. | ಬಜಾಜ್ ಎಂ-80 ಕೆಎ-14-ಕೆ-2553 | 16E-BDM 95788 | 16C B II M 96588 |

**ಜಿ.ಎ.ಎನ್. ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿಆರ್. 238

## ಸಹಕಾರ ಇಲಾಖೆ

### ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯ

### ನಂ. ಡಿಆರ್‌ಎಸ್: ಸಮಾಪನೆ: ಡಿಎಲ್‌ಎಸ್: 05-06/ 1923, ದಿನಾಂಕ:25ನೇ ಜನವರಿ, 2006

**ವಿಷಯ :** ಸಮಾಪನಾ ಆದೇಶಿತ ಸೇಕ್ರೆಡ್ ಹಾರ್ಟ್ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ. ಶಿವಮೊಗ್ಗ ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಆದೇಶ ನಂ.ಡಿಆರ್‌ಎಸ್:ಎಲ್‌ಕ್ಯೂಡಿ:22:03-04: ದಿನಾಂಕ: 30.09.2003.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ ರವರ ಪತ್ರ ನಂ.ಸನಿ-24: ಸಮಾಪನೆ:59: 05-06: 1787: ದಿನಾಂಕ: 23.01.2006.

ಸಮಾಪನಾ ಆದೇಶಿತ ಸೇಕ್ರೆಡ್ ಹಾರ್ಟ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ. ಶಿವಮೊಗ್ಗ, ಈ ಸಂಘವು ಶಿವಮೊಗ್ಗ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ಸಂಖ್ಯೆ: ಎಆರ್24: ನೊಂದಣಿ: 22219: 96-97: ದಿನಾಂಕ:04.07.1996ರಲ್ಲಿ ನೊಂದಣಿಯಾಗಿದ್ದು, ಕಾರ್ಯವ್ಯಾಪ್ತಿಯು ಶಿವಮೊಗ್ಗ ನಗರಸಭೆಯ ಸರಹದ್ದಿಗೆ ಸೀಮಿತವಾಗಿರುತ್ತದೆ. ಈ ಸಂಘವು ನೊಂದಣಿಯಾದ ಬೈಲಾದಲ್ಲಿಯ ಉಲ್ಲೇಖಗಳಂತೆ ಕಾರ್ಯಾಚರಣೆ ನಡೆಸಲು ಸ್ಥಗಿತಗೊಂಡ ಕಾರಣ, ಉಲ್ಲೇಖ (1)ರಲ್ಲಿಯ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೊಳಿಸಿದ್ದು, ಮಾರಾಟಾಧಿಕಾರಿ-1, ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ರವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿದೆ. ಸಮಾಪನಾಧಿಕಾರಿಯವರು ದಿನಾಂಕ: 27.11.2003 ರಂದು ಪ್ರಭಾರ ಪಡೆದಿದ್ದು, ನೊಂದಣಿ ರದ್ಧತಿಗಾಗಿ ಪ್ರಸ್ತಾವನೆಯನ್ನು ಉಲ್ಲೇಖ (2)ರಲ್ಲಿ ಪತ್ರದೊಂದಿಗೆ ಸಲ್ಲಿಸಿರುತ್ತಾರೆ.

ಈ ಸಂಘದಲ್ಲಿ ಸದಸ್ಯರಿಂದ ವಸೂಲು ಮಾಡಲು ಬಾಕಿಯಿರುವ ಸಾಲ ವಸೂಲು ಮಾಡಲು ಅಗತ್ಯ ದಾಖಲಾತಿಗಳು ಇರುವುದಿಲ್ಲವೆಂದು ವರದಿ ಮಾಡಿದ್ದು, ಸದಸ್ಯರಿಗೆ ಪಾವತಿ ಮಾಡಬೇಕಾದ ಷೇರು ಹಣವನ್ನು ಹೊಂದಾಣಿಕೆ ಮಾಡಿರುವುದಾಗಿ ವರದಿ ಮಾಡಿರುತ್ತಾರೆ. ಈ ಸಂಘದಲ್ಲಿ ಚರಾಸ್ತಿ, ಸ್ಥಿರಾಸ್ತಿ ಇರುವುದಿಲ್ಲವೆಂದು ಮತ್ತು ಸರ್ಕಾರದ ಷೇರು ಹಾಗೂ ಸಾಲ ಇಲ್ಲವೆಂದು ವರದಿ ಮಾಡಿದ್ದು, ಸಮಾಪನಾಧಿಕಾರಿಯವರು ಲೆಕ್ಕಹೊಂದಾಣಿಕೆ ಮಾಡಿ, ಆರ್ಥಿಕ ತಃಖ್ತೆ ಶೂನ್ಯಗೊಳಿಸಿರುತ್ತಾರೆ. ಸಮಾಪನಾಧಿಕಾರಿಯವರು ದಿನಾಂಕ: 29.11.2005ರಂದು ಅಂತಿಮ ನಡುವಳಿಕೆ ನಡೆಸಿದ್ದು, ನೊಂದಣಿ ರದ್ಧತಿಗಾಗಿ ಕೋರಿರುತ್ತಾರೆ. ಸದಸ್ಯರ ಹಾಗೂ ಸಾರ್ವಜನಿಕರ ಗಮನಕ್ಕಾಗಿ ಮತ್ತು ಅವರಿಂದ ಆಕ್ಷೇಪಣೆ ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಿ, ದಿನಾಂಕ: 04.01.2006ರ ಕ್ರಾಂತಿದೀಪ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಿಸಿದ್ದು, ಈ ಗಡುವು ದಿನಾಂಕದೊಳಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲ ಎಂದು ವರದಿ ಮಾಡಿರುತ್ತಾರೆ. ಉಲ್ಲೇಖ (2)ರಲ್ಲಿಯ ಪತ್ರದಲ್ಲಿ ಸಹಾಯಕ ನಿಬಂಧಕರು, ಶಿವಮೊಗ್ಗ ರವರು ನೊಂದಣಿ ರದ್ಧತಿಗೆ ಶಿಫಾರಸ್ ಮಾಡಿರುತ್ತಾರೆ. ಆದಕಾರಣ, ಈ ಕೆಳಕಾಣಿಸಿದಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ: 69: ಸಿಎಲ್ಎಂ: 2000: ದಿನಾಂಕ: 21.11.2001ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು ಸೇಕ್ರೆಡ್ ಹಾರ್ಟ್ ಕ್ರೆಡಿಟ್ ಕೋ-ಆಪರೇಟೀವ್ ಸೊಸೈಟಿ ಲಿ: ಶಿವಮೊಗ್ಗ, ಇದರ ನೊಂದಣಿ ಸಂಖ್ಯೆ: ಎಆರ್-24: ನೊಂದಣಿ: 22219: 96-97: ದಿನಾಂಕ: 04.07.1996 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ 25ನೇ ಜನವರಿ 2006ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

**ಕೆ. ಈಶ್ವರಸ್ವಾಮಿ**
ಸಹಕಾರ ಸಂಘಗಳ ಉಪ ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿಆರ್. 239

## ಸಮಾಜ ಕಲ್ಯಾಣ ಇಲಾಖೆ
## ಅಧಿಸೂಚನೆ
### ಸಂಖ್ಯೆ: ಸಕಇ 410 ಬಿಇಟಿ 2005, ಬೆಂಗಳೂರು, ದಿನಾಂಕ:24ನೇ ಜನವರಿ, 2006

ಹಿಂದುಳಿದ ವರ್ಗಗಳ ಇಲಾಖೆಯ ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿಗಳು/ ಸಹಾಯಕ ನಿರ್ದೇಶಕರುಗಳ ದಿನಾಂಕ: 01.01.2005ಕ್ಕೆ ಅನ್ವಯಿಸುವ ತಾತ್ಕಾಲಿಕ ಪದಕ್ರಮ ಪಟ್ಟಿಯನ್ನು ಇದರೊಡನೆ ಪ್ರಕಟಿಸಲಾಗಿದೆ. ತಾತ್ಕಾಲಿಕ ಪದಕ್ರಮ ಪಟ್ಟಿಗೆ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಲಿಖಿತ ದಾಖಲೆಗಳ ಮೂಲಕ ಪದಕ್ರಮ ಪಟ್ಟಿಯು ಪ್ರಕಟವಾದ 30 ದಿನಗಳ ಕಾಲಾವಧಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಎರಡನೇ ಮಹಡಿ, ವಿಕಾಸಸೌಧ, ಬೆಂಗಳೂರು-1, ಇವರಿಗೆ ಸಲ್ಲಿಸತಕ್ಕದ್ದು. ಸದರಿ ಅವಧಿಯ ನಂತರ ಸ್ವೀಕರಿಸಲಾದ ಆಕ್ಷೇಪಣೆಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ ಹಾಗೂ ಯಾವುದೇ ಆಕ್ಷೇಪಣೆ ಇಲ್ಲವೆಂದು ಭಾವಿಸಿ ಮುಂದಿನ ಕ್ರಮ ಜರುಗಿಸಲಾಗುವುದು.

| ಕ್ರ. ಸಂ. | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹಾಲಿ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ದಿನಾಂಕ | ಷರಾ |
|---|---|---|---|---|---|
| 1. | ಅರವಿಂದ ಎನ್. ಪ್ರಭಾ | 18.10.58 | 03.02.84 | 03.02.84 | |
| 2. | ಹೆಚ್.ಸಿ. ಮಲ್ಲೇಶಪ್ಪ | 16.03.57 | 25.01.84 | 25.01.84 | ಹಾಲಿ ಉಪ ನಿರ್ದೇಶಕರಾಗಿ (ಬಡ್ತಿ ಹೊಂದಿದ್ದಾರೆ.) |
| 3. | ಪ್ರಭುಸ್ವಾಮಿ | 05.02.55 | 01.02.84 | 01.02.84 | |
| 4. | ಶಿವಣ್ಣ | 02.02.56 | 01.02.84 | 01.02.84 | |
| 5. | ಬಿ. ಗಿರೀಶ್ | 20.06.57 | 30.01.84 | 30.01.84 | |
| 6. | ಪಿ.ಎ. ಗಣಪತಿ | 19.06.55 | 01.02.84 | 01.02.84 | |
| 7. | ಇ. ದೇವಯ್ಯ | 04.06.54 | 05.11.84 | 05.11.84 | |
| 8. | ಎಸ್.ಟಿ. ದೇವರಾಜು | 23.03.62 | 01.03.90 | 10.09.98 | |
| 9. | ಟಿ.ಬಿ. ಬಿರಾದಾರ್ | 01.06.50 | 15.12.75 | 13.04.99 | |
| 10. | ಹೆಚ್.ಎಂ. ಪೂಜಾರ್ | 12.04.55 | 20.08.82 | 13.04.99 | |
| 11. | ಲಕ್ಷ್ಮಾನಾಯಕ್ | 22.07.56 | 06.08.80 | 23.07.99 | |
| 12. | ಜಿ. ಜಗದೀಶ್ | 25.05.70 | 18.07.96 | 01.01.04 | |
| 13. | ಕೆ.ಜಿ. ತಿಮ್ಮಾರೆಡ್ಡಿ | 28.11.51 | 05.12.75 | 10.02.04 | |
| 14. | ಡಾ: ಸಿ.ಕೆ. ಜಗದೀಶ್‌ಕುಮಾರ್ | 04.06.70 | 29.08.96 | 01.03.04 | |
| 15. | ವೈ. ಈರಣ್ಣ | 15.04.53 | 29.09.81 | 04.03.04 | |
| 16. | ಜಿ. ಸೀತಾರಾಮಪ್ಪ | 01.06.51 | 05.08.75 | 06.03.04 | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಮರುಳಸಿದ್ದಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿಆರ್. 240

## ಕಂದಾಯ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಕಂಇ 101 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ:24ನೇ ಜನವರಿ, 2006

ಗೋದ್ರೇಜ್ ಆಗ್ರೋವೆಟ್ ಲಿಮಿಟೆಡ್, ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕು, ಅನುಗೊಂಡನಹಳ್ಳಿ ಹೋಬಳಿ, ತಿರುವರಂಗ ಗ್ರಾಮದ ಸರ್ವೆ ನಂ.24ರಲ್ಲಿ 01ಎ 20ಗು, 26/1 ರಲ್ಲಿ 01ಎ 06ಗು ಮತ್ತು 26/2 ರಲ್ಲಿ 01ಎ 10ಗು ಹೀಗೆ ಒಟ್ಟು: 03 ಎಕರೆ 36 ಗುಂಟೆ ಜಮೀನನ್ನು ಕೋಳಿ ಸಾಕಾಣಿಕೆ ವಿಸ್ತರಣೆಯ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್/ ಎಸ್‌ಆರ್-04/ 2005-06 ದಿನಾಂಕ: 12.08.2005ರ ಪ್ರಸ್ತಾಪಿತ ಮೇಲ್ಕಂಡ ಗ್ರಾಮದ ಸರ್ವೆ ನಂಬರ್‌ಗಳಲ್ಲಿ ಒಟ್ಟು 03 ಎಕರೆ 36 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109(1-ಎ) ಅಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ. ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇರೆಗೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯ್ತಿ ನೀಡಲು ಸದರಿ ಅಧಿನಿಯಮದ ಕಲಂ 109(1-ಎ) ರಲ್ಲಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1-ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು 1996ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಗೋದ್ರೇಜ್ ಆಗ್ರೋವೆಟ್ ಲಿಮಿಟೆಡ್, ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕು, ಅನುಗೊಂಡನಹಳ್ಳಿ ಹೋಬಳಿ, ತಿರುವರಂಗ ಗ್ರಾಮದ ಮೇಲಿನ ಸರ್ವೆ ನಂಬರ್‌ಗಳಲ್ಲಿ ಒಟ್ಟು ವಿಸ್ತೀರ್ಣ 03 ಎಕರೆ 36 ಗುಂಟೆ ಜಮೀನನ್ನು ಕೋಳಿ ಸಾಕಾಣಿಕೆ ವಿಸ್ತರಣೆಯ ಉದ್ದೇಶಕ್ಕಾಗಿ ಭೂ ಮಾಲೀಕರಿಂದ ಖರೀದಿಸಲು ಅಧಿನಿಯಮ 1961ರ ಕಲಂ 109 (1-ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸತಕ್ಕದ್ದು. ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪೆನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರಕ್ಕೆ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ ಓ.ಡಿ.ಪಿ./ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
5. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರಕ್ಕೆ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109ರನ್ವಯ ವಿನಾಯ್ತಿ ನೀಡಲು ಶಿಫಾರಸ್ಸು ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆ ಅಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸುಧಾರಣೆ).

ಪಿಆರ್. 241

## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರ ನ್ಯಾಯಾಲಯ

### ಇದಕ್ಕೆ ಯಾರು ಸಂಬಂಧ ಪಟ್ಟವರೋ ಅವರಿಗೆ ನೋಟೀಸ್

ಬೆಂಗಳೂರು ನಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಹಾಗೂ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಗಾಗಿ ಬಳಸಲಾಗಿದ್ದ ವಾಹನವನ್ನು ಪೊಲೀಸ್ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನದ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ವಾಹನದ ವಿವರ | ಪೊಲೀಸ್ ಠಾಣೆ/ ಮೊಕದ್ದಮೆ ಸಂಖ್ಯೆ | ವಾಹನದ ನೊಂದಣೆ ಸಂಖ್ಯೆ | ಇಂಜಿನ್ ನಂ/ ಚಾಸ್ಸಿ ನಂ. | ವಾಹನ ವಶಪಡಿಸಿಕೊಂಡ ದಿನಾಂಕ |
|---|---|---|---|---|---|
| 1. | ಬಜಾಜ್ ಚೇತಕ್ ಸ್ಕೂಟರ್ | ಆರಕ್ಷಕ ಉಪ ನಿರೀಕ್ಷಕರು, (ಅಪರಾಧ) ಗಂಗಮ್ಮ ಗುಡಿ ಪೊಲೀಸ್ ಠಾಣೆ/ ಮೊಕದ್ದಮೆ ಸಂಖ್ಯೆ: 112/ 2003 | MET-9087 | - | 03.07.2003 |
| 2. | ಬಜಾಜ್ ಚೇತಕ್ ಸ್ಕೂಟರ್ | ಆರಕ್ಷಕ ಉಪ ನಿರೀಕ್ಷಕರು, (ಅಪರಾಧ) ಗಂಗಮ್ಮ ಗುಡಿ ಪೊಲೀಸ್ ಠಾಣೆ/ ಮೊಕದ್ದಮೆ ಸಂಖ್ಯೆ: 112/ 2003 | ವಾಹನ ಸಂಖ್ಯೆ ಇಲ್ಲಾ | E-06CA- 129270 | 03.07.2003 |
| 3. | ಪ್ರಿಮಿಯರ್ ಪದ್ಮನೀ ಕಾರು | ಬನಶಂಕರಿ ಪೊಲೀಸ್ ಠಾಣೆ/ ಮೊಕದ್ದಮೆ ಸಂಖ್ಯೆ: 595/ 2003 | KA-20-M-67 | - | 26.09.2003 |
| 4. | ಅಂಬಾಸಿಡರ್ ಕಾರು | ಜಯನಗರ ಪೊಲೀಸ್ ಠಾಣೆ/ ಮೊಕದ್ದಮೆ ಸಂಖ್ಯೆ: 479/ 2003 | MEO-3236 | - | 05.10.2003 |
| 5. | ಆಟೋ ರಿಕ್ಷಾ | ಮಲ್ಲೇಶ್ವರಂ ಪೊಲೀಸ್ ಠಾಣೆ/ ಮೊಕದ್ದಮೆ ಸಂಖ್ಯೆ: 126/ 2004 | KA-05-A-1123 | - | 13.05.2004 |
| 6. | ಸಿಮೆಂಟ್ ಕಲರ್ ಬಜಾಜ್ ಚೇತಕ್ ಸ್ಕೂಟರ್ | ಗಂಗಮ್ಮ ಗುಡಿ ಪೊಲೀಸ್ ಠಾಣೆ/ ಮೊಕದ್ದಮೆ ಸಂಖ್ಯೆ: 83/2004 | KA-03-Q-8077 | ಚಾರ್ಸಿ ನಂ. 30842 ಎಂಜಿನ್ ನಂ. 91961 | 19.06.2004 |
| 7. | ಮೆಟಡೋರ್ ಗ್ರೀನ್ ಕಲರ್ | ಫ್ರೆಜರ್‌ಟೌನ್ ಪೊಲೀಸ್ ಠಾಣೆ, ಬೆಂಗಳೂರು/ ಮೊಕದ್ದಮೆ ಸಂಖ್ಯೆ: 127/ 2004 | KA-01-Z-5458 | ಚಾರ್ಸಿ ಸಂಖ್ಯೆ:616-ED-308938 ಇಂಜಿನ್ ಸಂಖ್ಯೆ:616969010205 | 07.04.2004 |
| 8. | ಫಿಯಟ್ ಕಾರ್ ತಿಳಿ ನೀಲಿ ಬಣ್ಣದ್ದು | ಆರಕ್ಷಕ ನಿರೀಕ್ಷಕರು, ಸಿಸಿಬಿ ಹೆಚ್ ಅಂಡ್ ಬಿ ದಳ ತಾಲ್ಲೂಕು ಆಫೀಸ್, ಕಾಂಪೌಂಡು ಬೆಂಗಳೂರು ರವರ ಸಿದ್ದಾಪುರ ಪಿ.ಎಸ್./ ಮೊಕದ್ದಮೆ ಸಂಖ್ಯೆ: 138/ 2005 | KA-02-M-1335 | - | 27.06.2005 |
| 9. | ಫಿಯಟ್ ಕಾರ್ ತಿಳಿ ಹಸಿರು ಬಣ್ಣದ್ದು | ಆರಕ್ಷಕ ನಿರೀಕ್ಷಕರು, ಸಿಸಿಬಿ ಹೆಚ್ ಅಂಡ್ ಬಿ ದಳ ತಾಲ್ಲೂಕು ಆಫೀಸ್, ಕಾಂಪೌಂಡು ಬೆಂಗಳೂರು ರವರ ಸಿದ್ದಾಪುರ ಪಿ.ಎಸ್./ ಮೊಕದ್ದಮೆ ಸಂಖ್ಯೆ: 138/ 2005 | CAN-9594 | - | 27.06.2005 |
| 10. | ಆಟೋ ರಿಕ್ಷಾ | ಆರಕ್ಷಕ ಉಪ-ನಿರೀಕ್ಷಕರು, ಅಪರಾಧ ವಿಭಾಗ, ಸಿಟಿ ಮಾರ್ಕೆಟ್ ಪೊಲೀಸ್ ಠಾಣೆ/ ಮೊಕದ್ದಮೆ ಸಂಖ್ಯೆ: 231/ 2002. | KA-05-6835 | - | 21.08.2002 |

ಈ ಮೇಲೆ ತೋರಿಸಿರುವ ವಾಹನಗಳ ಬಗ್ಗೆ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ವಾಹನದ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಕರ್ನಾಟಕ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳೊಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ.

ಈ ಮೇಲಿನ ವಾಹನದ ಬಗ್ಗೆ ಈ ಪ್ರಕಟಣೆ ಪ್ರಕಟಿತಗೊಂಡ (30) ದಿನಗಳೊಳಗಾಗಿ ಯಾರೂ ತಮ್ಮ ಅಹವಾಲುಗಳನ್ನು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತದ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳ ಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ಸದರಿ ವಾಹನಗಳಿಗೆ ಸಂಬಂಧಿಸಿದ ವಾಹನದ ವಾರಸುದಾರರು ಯಾರೂ ಇಲ್ಲವೆಂದು ಪರಿಗಣಿಸಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್-71(ಎ) ರ ಪ್ರಕಾರ ಏಕಪಕ್ಷೀಯವಾಗಿ ಕ್ರಮ ಕೈಗೊಂಡು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಬಿ.ಎಂ. ಪರಮೇಶ್ವರ**

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಬೆಂಗಳೂರು ನಗರ ವಿಭಾಗ, ಬೆಂಗಳೂರು.

ಪಿಆರ್. 242

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

## ನಂ.ಡಿಆರ್/ ಡಿವಿಜಿ/ ಎಲ್‌ಕ್ಯೂಡಿ/ ಸಿಆರ್-27/2005-06, ದಿನಾಂಕ: 25ನೇ ಜನವರಿ, 2006

**ವಿಷಯ:** ಸ್ಥಗಿತಗೊಂಡಿರುವ ಸರ್ಕಾರಿ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಬಸವಾಪಟ್ಟಣ, ಚನ್ನಗಿರಿ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವನೆ ದಿನಾಂಕ: 08.12.2005.
(2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ: 12.12.2005.
(3) ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರ ಪತ್ರ ದಿನಾಂಕ: 02.01.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69: ಸಿಎಲ್‌ಎಂ: 2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ.ಆಶಾ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸರ್ಕಾರಿ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಬಸವಾಪಟ್ಟಣ ಚನ್ನಗಿರಿ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರ ಚನ್ನಗಿರಿ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 25.01.2006ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿಆರ್. 243

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

## ನಂ.ಡಿಆರ್/ ಡಿವಿಜಿ/ ಸಮಾಪನೆ:ಸಿಆರ್-28/2003-04, ದಿನಾಂಕ: 24ನೇ ಜನವರಿ, 2006

**ವಿಷಯ:** ಸಮಾಪನೆಗೊಂಡಿರುವ ಶ್ರೀ ಸಿದ್ದವೀರಪ್ಪ ವಿವಿಧೋದ್ದೇಶ ಸಹಕಾರ ಸಂಘ ನಿ., ಶಿರಮಗೊಂಡನಹಳ್ಳಿ, ದಾವಣಗೆರೆ ತಾ: ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(3) ರಡಿಯಲ್ಲಿ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** (1) ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ: 09.11.2005.
(2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಪತ್ರ ಸಂಖ್ಯೆ: ಸನಿ-31: ಎಲ್‌ಕ್ಯೂಡಿ: ಸಮಾಪನೆ: ಪುನಃಶ್ಚೇತನ: ಸಿಆರ್: 2005-06: ದಿನಾಂಕ: 09.01.2006.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಈ ಕಛೇರಿಯ ಆದೇಶದ ಪ್ರಕಾರ ಶ್ರೀ ಸಿದ್ದವೀರಪ್ಪ ವಿವಿಧೋದ್ದೇಶ ಸಹಕಾರ ಸಂಘನಿ., ಶಿರಮಗೊಂಡನಹಳ್ಳಿ ದಾವಣಗೆರೆ ತಾ: ಇದನ್ನು ಸಮಾಪನೆಗೊಳಿಸಲಾಗಿತ್ತು. ಸಂಘದ ಸದಸ್ಯರು ದಿನಾಂಕ: 19.12.2005ರಂದು ಸರ್ವ ಸದಸ್ಯರ ಸಭೆಯಲ್ಲಿ ಭಾಗವಹಿಸಿ, ಸಂಘವನ್ನು ಅಭಿವೃದ್ಧಿಗೊಳಿಸಿ ರೂಪಿಸಿರುವ ಐದು ವರ್ಷಗಳ ಕ್ರಿಯಾ ಯೋಜನಾ ರೀತ್ಯಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪುನಃಶ್ಚೇತನಗೊಳಿಸಲು ಸರ್ವಾನುಮತದಿಂದ ತೀರ್ಮಾನಿಸಿರುತ್ತಾರೆ. ಸಂಘದ ಆಡಿಟ್‌ನ್ನು 2001-02 ರಿಂದ 2003-04ನೇ ಸಾಲಿನವರೆಗೂ ಮಾಡಲಾಗಿದ್ದು, ಆಡಿಟ್ ವರದಿ ಪ್ರತಿಯನ್ನು ಉಲ್ಲೇಖ (1)ರ ಪತ್ರದೊಂದಿಗೆ ಖಚಿತ ಪಟ್ಟಿರುತ್ತವೆ. ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಶಿಫಾರಸ್ಸು ಮಾಡಿರುತ್ತಾರೆ. ಪ್ರಸ್ತಾವನೆಯಲ್ಲಿನ ಕೋರಿಕೆಯನ್ನು ಪರಿಗಣಿಸಿ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವನ್ನು ಮುಂದುವರೆಸಿಕೊಂಡು ಹೋಗಲು 05 ವರ್ಷಗಳ ಕ್ರಿಯಾ ಯೋಜನಾ ರೀತ್ಯಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ನಿಬಂಧನೆಗೆ ಒಳಪಟ್ಟು ಅನುಮತಿ ನೀಡಲು ಉದ್ದೇಶಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3)ರನ್ವಯ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69: ಸಿಎಲ್‌ಎನ್: 2001 ದಿನಾಂಕ: 21.11.2001ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು ಕೆ.ಎಂ. ಆಶಾ, ಕೆಸಿಎಸ್ ಆದ ನಾನು ಶ್ರೀ ಸಿದ್ದವೀರಪ್ಪ ವಿವಿಧೋದ್ದೇಶ ಸಹಕಾರ ಸಂಘ ನಿ., ಶಿರಮಗೊಂಡನಹಳ್ಳಿ, ದಾವಣಗೆರೆ ತಾಲ್ಲೂಕು ಇದರ ಉಲ್ಲೇಖ (1)ರಲ್ಲಿನ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗಳಿಗೆ ಸೂಚಿಸಿದೆ ಹಾಗೂ ನೂತನ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ರಚಿಸಲು ಸಹಕಾರ ಸಂಘಗಳ ನಿರೀಕ್ಷಕರು 1ನೇ ವೃತ್ತ ದಾವಣಗೆರೆ ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಲಾಗಿದೆ. ಈ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಹಸ್ತ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ದಿನಾಂಕ: 24.01.2005ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿಆರ್. 244 ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

## ನಂ.ಡಿಆರ್/ ಡಿವಿಜಿ/ ಸಮಾಪನೆ:ಸಿಆರ್-52/2002-03, ದಿನಾಂಕ: 24ನೇ ಜನವರಿ, 2006

**ವಿಷಯ:** ಸಮಾಪನೆಗೊಂಡಿರುವ ಕುಂಬಾರರ ಕುಶಲ ಕೈಗಾರಿಕಾ ಸಹಕಾರ ಸಂಘ ನಿ., ನ್ಯಾಮತಿ, ಹೊನ್ನಾಳಿ ತಾಲ್ಲೂಕು, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(3) ರಡಿಯಲ್ಲಿ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** (1) ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ: 29.03.2003.
(2) ಸಹಕಾರ ಅಭಿವೃದ್ಧಿ ಅಧಿಕಾರಿ, ಹೊನ್ನಾಳಿ ಇವರ ಪ್ರಸ್ತಾವನೆ ದಿನಾಂಕ: 23.12.2005.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಈ ಕಛೇರಿಯ ಆದೇಶದ ಪ್ರಕಾರ ಕುಂಬಾರರ ಕುಶಲ ಕೈಗಾರಿಕಾ ಸಹಕಾರ ಸಂಘ ನಿ., ನ್ಯಾಮತಿ, ಹೊನ್ನಾಳಿ ತಾಲ್ಲೂಕು, ಇದನ್ನು ಸಮಾಪನೆಗೊಳಿಸಲಾಗಿತ್ತು. ಸಂಘದ ಸದಸ್ಯರು ದಿನಾಂಕ: 12.12.2005ರಂದು ವಾರ್ಷಿಕ ಮಹಾಸಭೆಯನ್ನು ನಡೆಸಿ ಉದ್ದೇಶಿತ ಸಂಘವನ್ನು ಪುನಶ್ಚೇತನಗೊಳಿಸಿ ಸಂಘದ ಮುಖಾಂತರ ಜನಾಂಗದ ಕುಶಲ ಕಾರ್ಮಿಕರು ಕುಂಬಾರಿಕೆಯನ್ನು ಮುಂದುವರೆಸಿಕೊಂಡು ಹೋಗಲು ಸಂಘದ ಮುಖಾಂತರ ಸೌಲಭ್ಯ ಪಡೆಯಲು ಸಂಘದ ಅವಶ್ಯಕತೆ ಇದೆ ಎಂದು ಹಾಗೂ ಸಂಘವನ್ನು ಪುನಃಶ್ಚೇತನಗೊಳಿಸಿಕೊಡಲು ಸರ್ವಾನುಮತದಿಂದ ತೀರ್ಮಾನಿಸಿರುತ್ತಾರೆ. ಆದ ಪ್ರಯುಕ್ತ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅನುಮತಿ ನೀಡಲು ಉಲ್ಲೇಖ (2)ರಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ ಹೊನ್ನಾಳಿ ಇವರ ಕೋರಿಕೆಯನ್ನು ಪರಿಗಣಿಸಿ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅನುಮತಿಯನ್ನು ನೀಡಲು ಉದ್ದೇಶಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

### ಆದೇಶ

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3)ರನ್ವಯ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69: ಸಿಎಲ್ಎಂ: 2001 ದಿನಾಂಕ: 21.11.2001ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರಾದ ಕೆ.ಎಂ. ಆಶಾ, ಕೆಸಿಎಸ್ ಆದ ನಾನು ಕುಂಬಾರರ ಕುಶಲ ಕೈಗಾರಿಕಾ ಸಹಕಾರ ಸಂಘ ನಿ., ನ್ಯಾಮತಿ ಹೊನ್ನಾಳಿ ತಾಲ್ಲೂಕು ಇದರ ಉಲ್ಲೇಖ (1)ರಲ್ಲಿ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗಳಿಗೆ ಸೂಚಿಸಿದೆ ಹಾಗೂ ನೂತನ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ರಚಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ ಹೊನ್ನಾಳಿ ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಲಾಗಿದೆ. ಈ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಹಸ್ತ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ದಿನಾಂಕ: 24.01.2005ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿಆರ್. 245 ದಾವಣಗೆರೆ ಜಿಲ್ಲೆ, ದಾವಣಗೆರೆ.

## ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಟಿ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ರವರ ಕಛೇರಿ ನಡುವಳಿಗಳು

## ನಂ.ಇಎಕ್ಸ್‌ಇ: ಸಿಆರ್ಎಂ: ಡಿಟಿಸಿಆರ್: 150: 2001-02, ದಿನಾಂಕ: 12ನೇ ಜನವರಿ, 2006

## ಗುನ್ನೆ ನಂ.-150/ 2001, ದಿನಾಂಕ:03ನೇ ನವೆಂಬರ್, 2001

## ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ತಿಕೋಟಾ ಪೊಲೀಸ್‌ಠಾಣೆ

**ಉಪಸ್ಥಿತರು:** ಕೆ.ಆರ್.ಗೌಡ್ರ,
ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

**ಪಿರ್ಯಾಧಿದಾರರು:**
ಪೊಲೀಸ್ ಸಬ್‌ಇನ್ಸ್‌ಪೆಕ್ಟರ್
ತಿಕೋಟಾ ಪೊಲೀಸ್ ಠಾಣೆ

**ವಿರುದ್ಧ**

**ಆರೋಪಿತರು:**
1. ಅಶೋಕ ಬಾಬು ಚವ್ಹಾಣ ಸಾ: ಪಾಂಡಿಜರಿ ತಾ: ಜತ್ತ, ಜಿ: ಸಾಂಗಲಿ, ಮಹಾರಾಷ್ಟ್ರ (ವಾಹನ ಮಾಲಿಕರು)
2. ಜಕ್ಕಪ್ಪ ತಂದಿ ಸಿದರಾಮ ಸಾಲಿ, ಸಾ: ಹೊನವಾಡ, ತಾ: ಬಿಜಾಪುರ.
3. ಸಂಗಪ್ಪ ತಂದಿ ಕಲ್ಲಪ್ಪ ಮಾಳಿ ಸಾ: ಹೊನವಾಡ, ತಾ: ಬಿಜಾಪುರ.

